ಲಿಖಿತ ಮೂಲಕ ಉತ್ತರಿಸುವ



ಕರ್ನಾಟಕ ವಿಧಾನ ಪರಿಷತ್ತು

ನೂರ ನಲವತ್ತನೆಯ ಅಧಿವೇಶನ

ಬುಧವಾರ, ದಿನಾಂಕ : 04 ನೇ ಮಾರ್ಚ್, 2020

ಕಂದಾಯ ಇಲಾಖೆಯಲ್ಲಿ ಸರ್ಕಾರದ ಸೌಲಭ್ಯ ನಿರಾಕರಿಸಿರುವ ಬಗ್ಗೆ

ಶ್ರೀ ಆರ್. ಧರ್ಮಸೇನ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ):-

179 (225) ಮಾನ್ಯ ಕಂದಾಯ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ :-

(ಅ) ರಾಷ್ಟ್ರೀಯ ಹೆದ್ದಾರಿ ಮುಂತಾದ ಸಾರ್ವಜನಿಕ ಉದ್ದೇಶಗಳಿಗಾಗಿ ಭೂಸ್ವಾಧೀನಪಡಿಸಿಕೊಂಡ ಭೂಮಾಲೀಕರಿಗೆ ನೀಡುವ ಪರಿಹಾರ ಧನದಿಂದ ಅವರು ಬೇರೆ ಜಮೀನು/ನಿವೇಶನ ಖರೀದಿಸಿದರೆ ಮುದ್ರಾಂಕ ಶುಲ್ಕ ಮತ್ತು ನೋಂದಣಿ ಶುಲ್ಕ ವಿನಾಯಿತಿ ಪಡೆಯಲು ಸರ್ಕಾರ ಅಧಿಸೂಚನೆ ಹೊರಡಿಸಿರುವುದು ನಿಜವೇ;

(ಆ) ಪರಿಹಾರ ಧನದ ಹಣದಿಂದ ಬೇರೆ ನಿವೇಶನ ಕೊಂಡು ಮುದ್ರಾಂಕ ಶುಲ್ಕವನ್ನು ಕಟ್ಟಿದ್ದು ದಿನಾಂಕ 10-02-2016ರ ಅಧಿಸೂಚನೆಯಂತೆ ವಿನಾಯಿತಿ ಇರುವುದರಿಂದ ಅದನ್ನು ಮರುಪಾವತಿ ಮಾಡಬೇಕೆಂದು ಅರ್ಜಿ ಸಲ್ಲಿಸಿದರೆ ಅದನ್ನು ನೀಡದೆ ನಿರಾಕರಿಸಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ;

(ಇ) ಸರ್ಕಾರದ ಸೌಲಭ್ಯವನ್ನು ಫಲಾನುಭವಿಗಳಿಗೆ ನೀಡದೆ ನಿರಾಕರಿಸುತ್ತಿರುವ ಅಧಿಕಾರಿಗಳ ಮೇಲೆ ಕ್ರಮ ಕೈಗೊಂಡು ಈ ಜನರಿಗೆ ನ್ಯಾಯ ದೊರಕಿಸಿಕೊಡಲು ಸರ್ಕಾರ ಕ್ರಮ ಕೈಗೊಳ್ಳುತ್ತದೆಯೇ?